ಶ್ರೀ ಕೆ. ವಿ. ನರಸಿಂಹ ಅಯ್ಯಂಗಾರ್ ಸ್ಮಾರಕ ಪುಸ್ತಕಮಾಲೆ-೩

ಶ್ರೀಮನ್ನಿಗಮಾಂತ ಮಹಾದೇಶಿಕರ

# ವೈರಾಗ್ಯ ಪಂಚಕ

(ಮೂಲ ಮತ್ತು ಅರ್ಥ)

ಇದಕ್ಕೆ ಹೊಂದಿಕೊಳ್ಳುವ
ಇನ್ನು ಕೆಲವು ರಚನೆಗಳೊಡನೆ

ಸಂಪಾದಕ :
ಜಿ. ಪಿ. ರಾಜರತ್ನಂ



“ವಿದೇಹ”, ೧೪, ೧೭ನೇ ಕ್ರಾಸ್ ರೋಡ್,
ಮಲ್ಲೇಶ್ವರಂ, ಬೆಂಗಳೂರು-೩.

ಬೆಲೆ : ೫೦ ಪೈಸೆ.

ಶ್ರೀ ಕೆ. ವಿ. ನರಸಿಂಹ ಅಯ್ಯಂಗಾರ್ ಸ್ಮಾರಕ ಪುಸ್ತಕಮಾಲೆ-೩

ಶ್ರೀಮನ್ನಿಗಮಾಂತ ಮಹಾದೇಶಿಕರ

# ವೈರಾಗ್ಯ ಪಂಚಕ

(ಮೂಲ ಮತ್ತು ಅರ್ಥ)

ಇದಕ್ಕೆ ಹೊಂದಿಕೊಳ್ಳುವ
ಇನ್ನು ಕೆಲವು ರಚನೆಗಳೊಡನೆ

ಸಂಪಾದಕ:
ಜಿ. ಪಿ. ರಾಜರತ್ನಂ



"ವಿದೇಹ", ೧೪, ೧೭ನೇ ಕ್ರಾಸ್ ರೋಡ್,
ಮಲ್ಲೇಶ್ವರಂ, ಬೆಂಗಳೂರು-೩.

ಮೊದಲನೆಯ ಮುದ್ರಣ : ೧೯-೯-೧೯೭೨

ಶ್ರೀ ವೇದಾಂತ ದೇಶಿಕರ ತಿರುನಕ್ಷತ್ರದ ದಿವಸ
ಇದು ಪ್ರಕಟವಾಯಿತು.

## ಒಳಪಿಡಿ



ಮುದ್ರಕರು :
ನ್ಯೂ ಬೆಂಗಳೂರು ಪ್ರಿಂಟರ್ಸ್
ಮಲ್ಲೇಶ್ವರಂ : ಬೆಂಗಳೂರು-೩

# ಅರಿಕೆ

ಶ್ರೀಮನ್ನಿಗಮಾಂತ ಮಹಾದೇಶಿಕರು ಕೇವಲ ವಡಗಲೆ ಸಂಪ್ರದಾಯದ ಶ್ರೀವೈಷ್ಣವರಿಗೆ ಸಂಮಾನ್ಯರಾದ ಮಹಾ ಆಚಾರ್ಯರು ಮಾತ್ರವಲ್ಲ; ಪರತತ್ತ್ವದಲ್ಲಿ ಪ್ರೀತಿಯುಳ್ಳವರಿಗೆಲ್ಲ ಇವರು ಬೇಕಾದವರು. ೧೯೬೮ ರಲ್ಲಿ ಇವರ ಏಳನೆಯ ಶತಮಾನೋತ್ಸವವನ್ನು ನಮ್ಮ ದೇಶ ಆಚರಿಸಿತು. ಆಗ ಇವರನ್ನು ಕುರಿತು ಹಲವಾರು ಗ್ರಂಥಗಳು ಪ್ರಕಟವಾದುವು. ಅದಕ್ಕೆ ನಾಲ್ಕು ವರ್ಷ ಹಿಂದೆ, ೧೯೬೪ ರಲ್ಲಿ, ಸನ್ಮಿತ್ರರಾದ ಶ್ರೀ ಡಿ. ಕೃಷ್ಣಯ್ಯಂಗಾರ್ ಅವರು "ಶ್ರೀ ವೇದಾಂತ ದೇಶಿಕರು" ಎಂಬ ೩೬೦ ಪುಟಗಳ ಪುಸ್ತಕವನ್ನು ಬರೆದರು. ಬೆಂಗಳೂರು ಅವೆನ್ಯೂ ರಸ್ತೆಯ "ಸುದರ್ಶನಂ ಅಂಡ್ ಕಂಪೆನಿ" ಇದನ್ನು ಪ್ರಕಟಿಸಿದರು. ಶ್ರೀ ದೇಶಿಕರ ವಿಷಯವನ್ನು ತಿಳಿಯಬೇಕೆನ್ನುವವರು ಈ ಪುಸ್ತಕವನ್ನು ನೋಡಬೇಕು.

ಈ ಪುಸ್ತಕಕ್ಕೆ ಡಾಕ್ಟರ್ ಡಿ. ವಿ. ಗುಂಡಪ್ಪನವರು "ಮುನ್ನುಡಿ" ಬರೆದಿದ್ದಾರೆ. ವೇದಾಂತ ದೇಶಿಕರನ್ನು ಕುರಿತು ಪ್ರಚಾರದಲ್ಲಿರುವ ಎರಡು ಕತೆಗಳನ್ನು ಇದರಲ್ಲಿ ಪರಿಶೀಲಿಸಿದ್ದಾರೆ. ಪ್ರಕೃತ, ಈ ಪುಸ್ತಕದಲ್ಲಿ ಕೊಟ್ಟಿರುವ "ವೈರಾಗ್ಯ ಪಂಚಕ"ಕ್ಕೆ ಸಂಬಂಧಿಸಿದ ಭಾಗವನ್ನು—ಅದಕ್ಕೆ ಹೊಂದಿದ ಇನ್ನಿತರ ಮಾತುಗಳೊಂದಿಗೆ ಇಲ್ಲಿ ಉದ್ಧರಿಸಿಕೊಂಡಿದ್ದೇನೆ. ಇದನ್ನು ಉಪಯೋಗಿಸಿಕೊಳ್ಳಲು ನನಗೆ ಅನುಮತಿ ಕೊಟ್ಟ ಹಿರಿಯರಾದ ಶ್ರೀ ಡಿ.ವಿ.ಜಿ. ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಶ್ರೀ ವೇದಾಂತ ದೇಶಿಕರ **"ವೈರಾಗ್ಯ ಪಂಚಕ"** ವನ್ನು, ಮೈಸೂರು ಮರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಸಂಸ್ಕೃತ ಪಂಡಿತರಾಗಿದ್ದ ವಿದ್ವಾನ್ ಶ್ರೀ ಎಂ. ವೆಂಕಟಾಚಾರ್ಯರು ಕರ್ಣಾಟಕ ಟೀಕಾ ತಾತ್ಪರ್ಯದೊಡನೆ ೧೯೪೧ರಲ್ಲಿ ಪ್ರಕಟಪಡಿಸಿದರು. ಈ ಹಿರಿಯರ ಪುಸ್ತಕದಿಂದ ನನಗೆ ಉಪಕಾರವಾಗಿದೆ. ಅವರಿಗೆ ನನ್ನ ವಂದನೆಗಳು.

ಇಹಲೋಕದ ಭೋಗಭಾಗ್ಯಗಳನ್ನು ತೃಣೀಕರಿಸಿ, ಪರತತ್ತ್ವವೊಂದನ್ನೇ ಸ್ವಯಂವರಿಸಿ, ವೈರಾಗ್ಯವನ್ನು ಬಲಿಯಿಸಿಕೊಂಡ ಮಹಾ ಚೇತನಗಳು "ಸರ್ವ

ದೇಶದಶಾಕಾಲೇಷು" (ಎಲ್ಲಾ ದೇಶ ದಿಕ್ಕು ಕಾಲಗಳಲ್ಲಿಯೂ) ಕಂಡುಬರುತ್ತಾರೆ. ಅಂಥವರಲ್ಲಿ ಶ್ರೀವೈಷ್ಣವ ಸಂಪ್ರದಾಯದ ಪರಮಾಚಾರ್ಯರೂ—

"ಯೋ ನಿತ್ಯಮಚ್ಯುತಪದಾಂಬುಜ ಯುಗ್ಮರುಕ್ಮ-
ವ್ಯಾಮೋಹತಃ ತದಿತರಾಣಿ ತೃಣಾಯ ಮೇನೇ"

ಶಾಶ್ವತವಾದ ಪರಬ್ರಹ್ಮದ ಪಾದಪದ್ಮಗಳೆರಡನ್ನು ಚಿನ್ನವೆಂದು ಪರಿಗಣಿಸಿ, ಅದರ ಮೇಲಿನ ವ್ಯಾಮೋಹದಿಂದ ಉಳಿದ ವಸ್ತುಗಳನ್ನು ತೃಣಕ್ಕೆ ಸಮನೆಂದು ಕಂಡು ಬದುಕಿದವರೂ ಆದ—ಭಗವದ್ರಾಮಾನುಜರ ಸಂಪ್ರದಾಯವನ್ನು ಊರ್ಜಿತಪಡಿಸಿದವರು ಶ್ರೀ ವೇದಾಂತ ದೇಶಿಕರು.

ಇದರಂತೆಯೇ ಉದಾತ್ತವಾದ ವೈರಾಗ್ಯಮನೋಭಾವವನ್ನು ಕುಲಶೇಖರ ಆಳ್ವಾರರ ಮುಕುಂದಮಾಲೆಯಲ್ಲೂ ಪಂಪ, ಹರಿಹರ, ಪುರಂದರ ದಾಸರು ಇವರ ರಚನೆಗಳಲ್ಲೂ ಕಾಣಬಹುದು. ಅದರ ಒಂದೊಂದು ಮಾದರಿಯನ್ನು ಇಲ್ಲಿ ಮೂಲ ಅರ್ಥಗಳೊಡನೆ ಕೊಟ್ಟಿದೆ. ಇದರ ಜೊತೆಗೆ ಭಗವದ್ಗೀತೆಯ (೪.೨೨)"ಯದೃಚ್ಛಾಲಾಭಸಂತುಷ್ಟಿ" ಎಂಬ ಭಾವನೆಯನ್ನೂ ಗಮನಿಸಬಹುದು. "ಆಯಾಸ ಮಾಡಿಕೊಳ್ಳದೆ, ದೊರೆತಷ್ಟರಿಂದ ತೃಪ್ತಿ. ಯಾವುದೋ ಪಾಡು ನಮ್ಮ ಪಾಲಿಗೆ ಬಂದಿದೆ; ಅದೇ ಇರಲಿ" ಎಂದು ನಿಶ್ಚಿಂತರಾಗಿ ಬದುಕುವವರಿಗೆ ಕರ್ಮದ ಪಾಶವಿಲ್ಲ.

ಮೂಢ ಜಹೀಹಿ ಧನಾಗಮತೃಷ್ಣಾಂ
ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ |
ಯಲ್ಲಭಸೇ ನಿಜಕರ್ಮೋಪಾತ್ತಂ
ವಿತ್ತಂ ತೇನ ವಿನೋದಯ ಚಿತ್ತಂ ||

"ಮೂಢ! ಹಣ ಬರಬೇಕೆಂಬ ವಿಪರೀತ ಆಸೆಯನ್ನು ಬಿಟ್ಟುಬಿಡು. ಆಸೆಯಿಲ್ಲದ ಮನಸ್ಸಿನಲ್ಲಿ ಸದ್ಬುದ್ಧಿಯನ್ನು ಉಂಟುಮಾಡು. ನಿನ್ನ ಕರ್ಮದಿಂದ ನಿನಗೆ ಏನು ಲಾಭವಾಗಿ ಬರುತ್ತದೋ ಆ ಹಣದಿಂದ ನಿನ್ನ ಚಿತ್ತವನ್ನು ವಿನೋದಪಡಿಸು" ಎಂದು "ಭಜಗೋವಿಂದ"ದಲ್ಲಿ ಶ್ರೀ ಶಂಕರಾಚಾರ್ಯರೂ ಇದನ್ನೇ ಹೇಳಿದರು. ನಮ್ಮ ಹಿಂದೂ ಸಂಪ್ರದಾಯದಲ್ಲಿ ಯಾವುದನ್ನು

(ಪುಟ ೧೫ ರಲ್ಲಿ ಮುಂದುವರಿದಿದೆ.)

## ಶ್ರೀ ವೇದಾಂತ ದೇಶಿಕರನ್ನು ಕುರಿತು

### ಡಾಕ್ಟರ್ ಡಿ. ವಿ. ಗುಂಡಪ್ಪನವರು

ಶ್ರೀಮಾನ್ ಡಿ. ಕೃಷ್ಣಯ್ಯಂಗಾರ್ಯರ 'ಶ್ರೀ ವೇದಾಂತ ದೇಶಿಕರು'
ಎಂಬ ಪುಸ್ತಕಕ್ಕೆ ಬರೆದಿರುವ 'ಮುನ್ನುಡಿ'ಯಿಂದ

### ಕೆಲವು ಮಾತುಗಳು

ಶ್ರೀ ವೇದಾಂತ ದೇಶಿಕರ ಮಹಿಮೆ ಬಹುಮುಖವಾದದ್ದು. ಒಂದು ಕಡೆ ಅವರು ನಾನಾ ಶಾಸ್ತ್ರಗಳ ಪಾರವನ್ನು ಕಂಡ ಪಂಡಿತರು; ಇನ್ನೊಂದು ಕಡೆ ಪ್ರೌಢಕಾವ್ಯ ಪ್ರಣೇತರು; ಮತ್ತೊಂದು ಕಡೆ ಸ್ವಮತ ಸಿದ್ಧಾಂತ ಪ್ರವರ್ತನ ದಕ್ಷರು; ಇನ್ನೊಂದು ಕಡೆ ಜ್ಞಾನ, ಭಕ್ತಿ, ವೈರಾಗ್ಯ ಸಂಪನ್ನರಾದ ತಪಸ್ವಿಗಳು. ಇಂಥವರ ಜೀವನಚರಿತ್ರೆ ಲೋಕಕ್ಕೆ ಜೀವನಸಮುನ್ನತಿಯ ಮಾರ್ಗದರ್ಶಿಯಾಗುತ್ತದೆ. ಪರತತ್ತ್ವವು ನನಗೆ ಪರೋಕ್ಷದ ವಿಷಯ. ಈ ಪ್ರತ್ಯಕ್ಷ ಗುಣಗಳಲ್ಲಿ ಶ್ರೀ ದೇಶಿಕರಿಗಿಂತ ಉತ್ತಮವಾದ ಆದರ್ಶವನ್ನು ಮನಸ್ಸಿನಿಂದ ಊಹಿಸುವುದು ಕೂಡ ನನಗೆ ಅಸಾಧ್ಯವೆನ್ನಿಸಿದೆ.

ವೇದಾಂತ ದೇಶಿಕರು ವಿದ್ಯಾರಣ್ಯರ ಸಮಕಾಲೀನರು. ಅವರಿಬ್ಬರೂ ಬಹುಶಃ ಸ್ನೇಹಿತರಾಗಿದ್ದಿರಬೇಕೆಂದು ನನ್ನ ಊಹೆ. ಅದಕ್ಕೆ ಕಾರಣ ಅವರಿಬ್ಬರೂ ಕಾಂಚೀ ಪಟ್ಟಣದಲ್ಲಿ ಬಹುಕಾಲ ವಾಸವಾಗಿದ್ದವರೆಂಬ ಸಂಗತಿ. ಕಂಚಿ ವಿಸ್ತೀರ್ಣದಲ್ಲಿ ಬಹು ದೊಡ್ಡದಲ್ಲವಾದ್ದರಿಂದಲೂ ಅವರಿಬ್ಬರೂ ಅಲ್ಲಿಯ ವಿದ್ವದ್ಗೋಷ್ಠಿಗೆ ಸೇರಿದವರಾಗಿದ್ದದ್ದರಿಂದಲೂ ಅವರಿಗೆ ಒಬ್ಬರನ್ನೊಬ್ಬರು ಕಾಣುವ, ಸೇರಿ ಮಾತನಾಡುವ ಅವಕಾಶಗಳು ಪದೇಪದೇ ಒದಗಿರಬೇಕು.

ವಿದ್ಯಾರಣ್ಯರ ಪೂರ್ವಾಶ್ರಮದ ಕೃತಿಯೆಂದೂ ಅಥವಾ ಅವರ ಪೂರ್ವಾಶ್ರಮದ ತಮ್ಮಂದಿರಾದ ಸಾಯಣಾಚಾರ್ಯರ ಮಗ ಮಾಧವ ಎಂಬವರ ಕೃತಿಯೆಂದೂ ಪ್ರಸಿದ್ಧವಾಗಿರುವ 'ಸರ್ವದರ್ಶನ ಸಂಗ್ರಹ' ಗ್ರಂಥದಲ್ಲಿ ಭಗವದ್ರಾಮಾನುಜ ದರ್ಶನದ ವಿವರಣೆಯಲ್ಲಿ ವೇಂಕಟನಾಥರ ವಾಕ್ಯವನ್ನು ಪ್ರಮಾಣವೆಂದಂಗೀಕರಿಸಿ, ಅವರ 'ತತ್ತ್ವಮುಕ್ತಾಕಲಾಪ'ದಿಂದ ಉದಾಹರಣೆ

ಕೊಟ್ಟು ಗೌರವಿಸಿದ್ದಾರೆ. ಇದು ವಿದ್ಯಾಗಣ್ಯ ವೇಂಕಟನಾಥರಲ್ಲಿದ್ದ ಅನ್ಯೋನ್ಯ ಗೌರವಕ್ಕೆ ಗುರುತಾಗಿದೆ.

ವೇದಾಂತ ದೇಶಿಕ, ವಿದ್ಯಾರಣ್ಯರ ಕಾಲವು ಹಿಂದೂಮತಕ್ಕೆ ಭಯ, ಅಪಾಯಗಳ ಕಾಲವಾಗಿತ್ತೆಂಬುದು ಚರಿತ್ರೆಯ ಸಂಗತಿ. ಮಲ್ಲಿಕ್ ಕಾಫರ್ ಮೊದಲಾದ ಮಹಮ್ಮದೀಯ ಯುದ್ಧವೀರರ ಹಾವಳಿ ಹಿಂದೂಜನರ ಮಠ, ದೇವಾಲಯಾದಿ ಧರ್ಮಸಂಸ್ಥೆಗಳ ಮೇಲೆ ಅಪ್ರತಿಹತವಾಗಿ ನಡೆದಿತ್ತು. ಅದರ ಸಂಕಟ ಸಂತಾಪಗಳನ್ನು ಅವರಿಬ್ಬರೂ ಅನುಭವಿಸಿದ್ದರು. ದೇಶಿಕರು 'ಅಭೀತಿ ಸ್ತವ'ದಲ್ಲಿ ತಮ್ಮ ಮನಃಪ್ರತಿಕ್ರಿಯೆಯನ್ನು ಸ್ಫುಟಗೊಳಿಸಿದ್ದಾರೆ.

ಕಲಿಪ್ರಣಿಧಿಲಕ್ಷಣೈಃ ಕಲಿತಶಾಕ್ಯಲೋಕಾಯತೈಃ।
ತುರುಷ್ಕಯವನಾದಿಭಿರ್ಜಗತಿ ಜೃಂಭಮಾಣಂ ಭಯಂ॥

ವಿದ್ಯಾರಣ್ಯರ ಮನಃಪ್ರಕ್ರಿಯೆ ಬೇರೆ ತೆರದ್ದಾಗಿರಲಿಲ್ಲ. ಆದರೆ ಆ ಉದ್ವೇಗದ ಅಭಿವ್ಯಕ್ತಿ ಬೇರೆ ರೀತಿಯದಾಯಿತು. ಅದು ರಾಜಕೀಯ ಕಾರ್ಯವಾಯಿತು. ಹಿಂದೂ ರಾಜನೊಬ್ಬನು ಪರಾಕ್ರಮಿಯಾಗಿ ಮುಂದಕ್ಕೆ ಬಂದ ಹೊರತು ಹಿಂದೂಧರ್ಮಕ್ಕೆ ಉಳಿಗಾಲವಿಲ್ಲವೆಂದು ಭಾವಿಸಿದರು ಅವರು :

"ಅಸ್ಮಿನ್ ರಾಷ್ಟ್ರೇ ರಾಜನ್ಯ ಇಷವ್ಯಃ।
ಶೂರೋ ಮಹಾರಥೋ ಜಾಯತಾಮಿತ್ಯಾಹ"॥

ಈ ಶ್ರುತಿವಾಕ್ಯವು ವಿದ್ಯಾರಣ್ಯರಿಗೆ ಕಾರ್ಯಸೂತ್ರವಾಯಿತು. ಅದಕ್ಕನುಕೂಲವಾಗಿ ಹರಿಹರ ಬುಕ್ಕರು ವಿದ್ಯಾರಣ್ಯರಲ್ಲಿ ಶಿಷ್ಯರಾಗಿ ಬಂದು ಅವರ ಪ್ರೇರಣೆಯಂತೆ ನೂತನರಾಜ್ಯಸ್ಥಾಪನೆಗೆ ಉದ್ಯುಕ್ತರಾಗಿ ಮುಂದೆ ಬಂದರು. ಅವರ ಸಾಹಸ ಅಭಿಮಾನಗಳಿಂದ ವಿಜಯನಗರದ ರಾಜ್ಯವು ಸ್ಥಾಪಿತವಾಗಿ ಅಭಿವರ್ಧಿಸಿತು.

ಆ ರಾಜ್ಯವು ಸುಸ್ಥಿರವಾಗಿ ನಿಂತು ಸಂಪತ್ಸಮೃದ್ಧವಾದಾಗ ಅದರ ಆಶ್ರಯದಲ್ಲಿ ವಿದ್ಯಾರಣ್ಯರು ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಸಾಯಣಾಚಾರ್ಯರ ಸಹಾಯದೊಡನೆ ವೇದಶಾಸ್ತ್ರ ಪ್ರೋತ್ಸಾಹದ ಕಾರ್ಯಕ್ಕೆ ನಿಂತರು. ಈ ಸಂದರ್ಭಕ್ಕೆ ಸಂಬಂಧಪಟ್ಟದ್ದು ನಮಗೆ ಇಲ್ಲಿ ಪ್ರಸಕ್ತವಾಗಿರುವ ಕಥೆ. ವಿದ್ಯಾರಣ್ಯರು ವೇದಾಂತ ದೇಶಿಕರಿಗೆ ರಾಜಾಶ್ರಯವನ್ನು ಕೊಡಿಸುವು

ದಾಗಿ ಆಸೆ ಹುಟ್ಟಿಸಿ ಆಹ್ವಾನ ಕಳುಹಿಸಿದರೆಂದೂ ದೇಶಿಕರು ತಮಗೆ ರಾಜಾಶ್ರಯ ಬೇಕಿಲ್ಲವೆಂದು ಆಹ್ವಾನವನ್ನು ನಿರಾಕರಿಸಿದರೆಂದೂ ಆ ಕಥೆ. ಕಥೆ ಕಟ್ಟಿದವರ ಉದ್ದೇಶವು ದೇಶಿಕರ ವೈರಾಗ್ಯದ ನಿಸ್ಸೀಮತೆಯನ್ನು ತೋರಿಸಬೇಕೆಂಬುದೆಂದು ಸ್ಪಷ್ಟವಾಗಿದೆ. ಆ ಉದ್ದೇಶವು ಶ್ಲಾಘ್ಯವಾದದ್ದೇ ಸರಿ. ಆದರೆ ಆ ಕಥೆಗೆ ತಥ್ಯದ ಆಧಾರವುಂಟೆಂದು ತೋರಿಸಲು ಯಾವ ಪ್ರಮಾಣವೂ ಇಲ್ಲ. ವಿದ್ಯಾರಣ್ಯರು ಆಹ್ವಾನ ಕೊಟ್ಟರೆಂದರೆ ಅದು ಅಸಂಭವವಲ್ಲ, ಅವರು ತೊಡಗಿದ್ದು ಒಂದು ಮಹಾಕಾರ್ಯಕ್ಕೆ. ಅದಕ್ಕೆ ದೇಶಿಕರಂಥ ಮಹಾಪಂಡಿತರ ಸಹಕಾರ ತುಂಬಾ ಅವಶ್ಯವಾಗಿತ್ತು. ಆ ಸಹಕಾರವನ್ನು ವಿದ್ಯಾರಣ್ಯರು ಬೇಡಿರಬಹುದು. ದೇಶಿಕರು ವಿದ್ಯಾರಣ್ಯರ ಆಶಯವನ್ನು ಅನ್ಯಥಾ ಗ್ರಹಿಸಿದರೋ, ಅಥವಾ ತಾವು ನಿಶ್ಚಿಂತರಾಗಿ ನಿರುಪಾಧಿಕವಾಗಿರಬೇಕೆಂದು ಮನಸ್ಸು ಮಾಡಿದ್ದರೋ, ಅದು ಹೇಗಾದರಿರಲಿ, ಅವರು ವಿದ್ಯಾರಣ್ಯರ ಆಹ್ವಾನವನ್ನು ಸ್ವೀಕರಿಸದೆ ಬಿಟ್ಟರೆಂಬುದು ಅಸಂಭವವಾಗದು. ಆಹ್ವಾನವೂ ಅದರ ಅನಂಗೀಕಾರವೂ ಎರಡೂ ಸಂಭವಗಳೆಂದೇ ಇಟ್ಟುಕೊಳ್ಳೋಣ. ಆದರೆ ಕಥೆಯಲ್ಲಿ ಅಸಂಗತಗಳಾದ ಧ್ವನಿಗಳು ಎರಡಿವೆ:
(೧) ವಿದ್ಯಾರಣ್ಯರು ತಾವು ರಾಜಾಶ್ರಯ ವ್ಯಾಮೋಹಿತರಾಗಿದ್ದರೆಂಬುದು.
(೨) ಅವರು ವೇದಾಂತ ದೇಶಿಕರಲ್ಲಿ ಆಶೋತ್ಪಾದನೆ ಮಾಡಲು ಯತ್ನಿಸಿದರೆಂಬುದು. ಈ ಎರಡು ಸೂಚನೆಗಳೂ ತಿರಸ್ಕಾರಾರ್ಹಗಳೇ. ವಿದ್ಯಾರಣ್ಯರೂ ದೇಶಿಕರಂತೆಯೇ ವಿರಕ್ತರಾಗಿದ್ದವರು. ಭೋಗ ಭಾಗ್ಯಗಳ ಆಕಾಂಕ್ಷೆ ಒಬ್ಬರಿಗೆ ಹೇಗೆ ಇರಲಿಲ್ಲವೋ ಇನ್ನೊಬ್ಬರಿಗೂ ಹಾಗೆಯೇ ಕಿಂಚಿತ್ತೂ ಇರಲಿಲ್ಲ. ಇಬ್ಬರೂ ಸಮಾನ ನಿಸ್ಸ್ವಾರ್ಥಿಗಳು. ಆದರೆ ರಾಜರಾಜ್ಯೋಪಯೋಗಗಳ ವಿಷಯದಲ್ಲಿ ಅವರಿಬ್ಬರ ದೃಷ್ಟಿಗಳೂ ಬೇರೆಬೇರೆಯಾಗಿದ್ದಿರಬಹುದು. ಇದರಿಂದ ಒಬ್ಬರು ಲೋಭಿ, ಇನ್ನೊಬ್ಬರು ತದ್ವಿರೋಧಿ ಎಂದು ಸಿದ್ಧವಾಗುವುದಿಲ್ಲ.

ಈ ಮೇಲಣ ಕಥೆಯ ಸಂದರ್ಭದಲ್ಲಿ ದೇಶಿಕರ ಬಾಯಿಂದ ಹೊರಟು ಬಂದವೆಂದು ಹೇಳಲಾಗಿರುವ ಪದ್ಯಗಳು ವಿದ್ಯಾರಣ್ಯರಿಗೂ ಸಮಾನವಾಗಿ ಸಮ್ಮತಗಳಾಗತಕ್ಕವೇ.

> “ ಶಿಲಂ ಕಿಮನಲಂ ಭವೇತ್ ಅನಲಮೌದರಂ ಬಾಧಿತುಂ ।
> ಪಯಃ ಪ್ರಸೃತಿಪೂರಕಂ ಕಿಮು ನ ಧಾರಕಂ ಸಾರಸಂ ॥ ”

"ದುರೀಶ್ವರ ದ್ವಾರ ಬಹಿರ್ವಿತರ್ದಿಕಾ
ದುರಾಸಿಕಾಯೈ ರಚಿತೋಽಯಮಂಜಲಿಃ"

ಇತ್ಯಾದಿ.,

ವಿತ್ತವಿರಕ್ತಿಯು ಜಿಹಾಸೆಯ ರೂಪವನ್ನಾದರೂ ತಾಳಬಹುದು, ಉತ್ಕೃಷ್ಟಾರ್ಥನಿಯೋಜನೆಯ ರೂಪವನ್ನಾದರೂ ತಾಳಬಹುದು.

ವೇದಾಂತ ದೇಶಿಕರು ಜ್ಞಾನ ವಿನಯ ವೈರಾಗ್ಯ ಸಂಪನ್ನರು. ಅಂಥವರಲ್ಲಿ ಕೀಳ್ತರದ ಮನೋಭಾವವನ್ನು ಸೂಚಿಸುವ ಕಥೆಗಳಿಗೆ ಸಾಧುಸಜ್ಜನರಲ್ಲಿ ಎಂದಿಗೂ ಸ್ಥಳ ಸಲ್ಲದು. ನನಗೆ ದೇಶಿಕರ ಸಾವಿರ ಸೂಕ್ತಿಗಳಲ್ಲಿ ಎರಡು ಸರ್ವದಾ ಮನನೀಯವಾಗಿವೆ :

"ಅತಸ್ಕರಗ್ರಾಹ್ಯ ಪವಿತ್ರಪಾತ್ರ್ಯೈಃ
ಅನಿಂದ್ರಿಯೋನ್ಮಾದಕರೈರ್ಹವಿರ್ಭಿಃ"

ದೇಶಿಕರು ಆಹ್ನಿಕಾದಿ ಸಮಸ್ತ ಕಾರ್ಯಗಳಿಗೂ ಉಪಯೋಗಿಸುವ ಪಾತ್ರೆಪರಿಕರಗಳು ಕಳ್ಳನು ಕೂಡ ಬೇಡವೆನ್ನುವಂಥಾದ್ದಾಗಿರಬೇಕಂತೆ! ಅಷ್ಟು ಸರಳವಾದ ನಿರಾಡಂಬರವಾದ ಜೀವನ ಅವರದು. ಅವರು ಭಗವಂತನಿಗೆ ನೈವೇದ್ಯ ಮಾಡುವ ಸಾಮಗ್ರಿಯಲ್ಲಿ ತಾಮಸರಾಜಸಗಳ ಮಾದಕ ಗಂಧ ಕೊಂಚವೂ ಇರಕೂಡದಂತೆ! ಎಲ್ಲವೂ ಸಾತ್ತ್ವಿಕರಸಮಯವಾಗಿರಬೇಕು. ಇದು ಅವರ ಜೀವನವ್ರತ. 'ಅನಪೇಕ್ಷಶ್ಶುಚಿರ್ದಕ್ಷಃ' ಎಂಬ ಗೀತೋಪದೇಶಕ್ಕೆ ವಿಧೇಯರಾಗಿದ್ದು ಸಂತೋಷಿಸಿದವರು ದೇಶಿಕರು.

ನನ್ನ ಮನಸ್ಸನ್ನು ತುಂಬಾ ಹಿಡಿದಿರುವ ಅವರ ಮತ್ತೊಂದು ಸೂಕ್ತಿ ಇದು :

"ಕರ್ಮಾವಲಂಬಕಾಃ ಕೇಚಿತ್ ಕೇಚಿತ್ ಜ್ಞಾನಾವಲಂಬಕಾಃ
ವಯಂ ತು ಹರಿದಾಸಾನಾಂ ಪಾದರಕ್ಷಾವಲಂಬಕಾಃ"

ಈ ನಮ್ರತೆ, ಈ ಭಗವದ್ವಿಧೇಯತೆ, ಅಂಥಾ ಜ್ಞಾನಸಂಪತ್ತಿನೊಡನೆ ಕೂಡಿಕೊಂಡಾಗ ಮಾನುಷ್ಯ ದೈವ್ಯಗಳ ಸಮ್ಮೇಳನವಾದಂತೆ. ಅದೇ 'ವಿದ್ಯಾ ವಿನಯ ಸಂಪನ್ನೇ' ಎಂಬ ಭಗವದುಕ್ತಿಯ ಅಂತರ್ಭಾವವೆಂದು ನನಗನ್ನಿಸುತ್ತದೆ.

—ಡಿ. ವಿ. ಗುಂಡಪ್ಪ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮನ್ ನಿಗಮಾಂತಮಹಾದೇಶಿಕರು ಅನುಗ್ರಹಿಸಿದ

# ವೈರಾಗ್ಯ ಪಂಚಕಮ್

ಶ್ರೀಮಾನ್ ವೇಂಕಟನಾಥಾರ್ಯಃ
ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ
ಸನ್ನಿಧತ್ತಾಂ ಸದಾ ಹೃದಿ ॥

ಕ್ಷೋಣೀಕೋಣಶತಾಂಶಪಾಲನಕಲಾ-
ದುರ್ವಾರಗರ್ವಾನಲ-
ಕ್ಷುಭ್ಯತ್ಕ್ಷುದ್ರನರೇಂದ್ರಚಾಟುರಚನಾ-
ಧನ್ಯಾನ್ ನ ಮನ್ಯಾಮಹೇ ।
ದೇವಂ ಸೇವಿತುಮೇವ ನಿಶ್ಚಿನುಮಹೇ
ಯೋಽಸೌ ದಯಾಲುಃ ಪುರಾ
ಧಾನಾಮುಷ್ಟಿಮುಚೇ ಕುಚೇಲಮುನಯೇ
ದತ್ತೇ ಸ್ಮ ವಿತ್ತೇಶತಾಮ್ ॥೧॥

ಶಿಲಂ ಕಿಮನಲಂ ಭವೇದನಲಮೌದರಂ ಬಾಧಿತುಂ
ಪಯಃ ಪ್ರಸೃತಿಪೂರಕಂ ಕಿಮು ನ ಧಾರಕಂ ಸಾರಸಮ್ ।
ಅಯತ್ನಮಲಮಲ್ಲಕಂ ಪಥಿ ಪಟಚ್ಚರಂ ಕಚ್ಚರಂ
ಭಜನ್ತಿ ವಿಬುಧಾ ಮುಧಾ ಹ್ಯಹಹ ಕ್ಷುಕ್ಷಿತಃ ಕುಕ್ಷಿತಃ ॥೨॥

ಜ್ವಲತು ಜಲಧಿಕ್ರೋಡಕ್ರೀಡತ್ ಕೃಪೀಡಭವಪ್ರಭಾ-
ಪ್ರತಿಭಟಪಟುಜ್ವಾಲಾಮಾಲಾಕುಲೋ ಜಠರಾನಲಃ ।
ತೃಣಮಪಿ ವಯಂ ಸಾಯಂಸಂಫುಲ್ಲಮಲ್ಲಿಮತಲ್ಲಿಕಾ-
ಪರಿಮಲಮುಚಾ ವಾಚಾ ಯಾಚಾಮಹೇ ನ ಮಹೀಶ್ವರಾನ್ ॥೩॥

ದುರೀಶ್ವರದ್ವಾರ ಬಹಿರ್ವಿತರ್ದಿಕಾ-
ದುರಾಸಿಕಾಯೈ ರಚಿತೋಽಯಮಂಜಲಿಃ ।
ಯದಂಜನಾಭಂ ನಿರಪಾಯಮಸ್ತಿ ಮೇ
ಧನಂಜಯಸ್ಯಂದನಭೂಷಣಂ ಧನಮ್ ॥೪॥

ಶರೀರಪತನಾವಧಿ ಪ್ರಭುನಿಷೇವಣಾಪಾದನಾತ್
ಅಬಿಂಧನಧನಂಜಯಪ್ರಶಮದಂ ಧನಂ ದಂಧನಮ್ ।
ಧನಂಜಯವಿವರ್ಧನಂ ಧನಮುದೂಢಗೋವರ್ಧನಂ
ಸುಸಾಧನಮಬಾಧನಂ ಸುಮನಸಾಂ ಸಮಾರಾಧನಮ್ ॥೫॥

ನಾಸ್ತಿ ಪಿತ್ರಾರ್ಜಿತಂ ಕಿಂಚಿತ್
ನ ಮಯಾ ಕಿಂಚಿದಾರ್ಜಿತಮ್ ।
ಅಸ್ತಿ ಮೇ ಹಸ್ತಿಶೈಲಾಗ್ರೇ
ವಸ್ತು ಪೈತಾಮಹಂ ಧನಮ್ ॥ ॥೬॥

॥ ವೈರಾಗ್ಯ ಪಂಚಕಮ್ ಸಂಪೂರ್ಣಂ ॥

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

# ವೈರಾಗ್ಯ ಪಂಚಕಕ್ಕೆ ಅರ್ಥ

ಕವಿ ತಾರ್ಕಿಕ ಕೇಸರೀ (ಕವಿಗಳಲ್ಲಿಯೂ ತಾರ್ಕಿಕರಲ್ಲಿಯೂ ಶ್ರೇಷ್ಠ ರಾದವರೂ). ವೇದಾಂತಾಚಾರ್ಯವರ್ಯಃ (ವೇದಾಂತವಿದ್ಯೆಯನ್ನು ಉಪದೇಶ ಮಾಡುವ ಆಚಾರ್ಯರುಗಳಲ್ಲಿ ಶ್ರೇಷ್ಠರಾದವರೂ) ಆದ—ಶ್ರೀಮಾನ್ ವೇಂಕಟ ನಾಥಾರ್ಯಃ (ಭಕ್ತಿಜ್ಞಾನ ವೈರಾಗ್ಯಗಳ ಸಂಪತ್ತನ್ನುಳ್ಳ ವೇಂಕಟನಾಥಾರ್ಯರು) ಎಂದರೆ ಶ್ರೀಮದ್ವೇದಾಂತ ದೇಶಿಕರು ಮೇ (ನನ್ನ) ಹೃದಿ (ಹೃದಯದಲ್ಲಿ) ಸನ್ನಿಧತ್ತಾಂ (ತಮ್ಮ ಸಾನ್ನಿಧ್ಯವನ್ನು ಕೊಡುತ್ತಾ ಇರಲಿ.)

(ಆಚಾರ್ಯರು ರಚಿಸಿರುವ "ವೈರಾಗ್ಯ ಪಂಚಕ"ವನ್ನು ಪಠನಮಾಡುವ ಮೊದಲು ಆಚಾರ್ಯರನ್ನು ಸ್ತೋತ್ರಮಾಡುವುದು ಶ್ರೀ ವೈಷ್ಣವರಲ್ಲಿ ಸಂಪ್ರದಾಯ. ಇಂತಹ ಶ್ಲೋಕವನ್ನು "ತನಿಯನ್" ಎಂದರೆ ಬಿಡಿಪದ್ಯ ಎನ್ನುತ್ತಾರೆ. ಈ ತನಿಯನ್ನನ್ನು ರಚಿಸಿದವರು ವೇದಾಂತ ದೇಶಿಕರ ಮಕ್ಕಳಾದ ಕುಮಾರವರದಾಚಾರ್ಯರು.)

೧

ಕ್ಷೋಣೀ (ಭೂಮಿಯ) ಕೋಣ (ಯಾವುದೋ ಒಂದು ಮೂಲೆಯ) ಶತಾಂಶ (ನೂರರಲ್ಲಿ ಒಂದು ಪಾಲಿನಷ್ಟನ್ನು) ಪಾಲನ ಕಲಾ (ಕಾಪಾಡುವ ಕಲೆಯುಷ್ಟರಿಂದಲೇ)—

ದುರ್ವಾರ (ತಡೆಯುವುದಕ್ಕೆ ಕಷ್ಟವಾದ) ಗರ್ವಾನಲ (ಗರ್ವವೆಂಬ ಬೆಂಕಿಯಿಂದ) ಕ್ಷುಭ್ಯತ್ (ಕದಡಿಹೋಗಿ, ಬುದ್ಧಿಯ ಸ್ತಿಮಿತತೆಯನ್ನು ಕಳೆದುಕೊಂಡು)—

ಕ್ಷುದ್ರನರೇಂದ್ರ (ಅಲ್ಪರಾದ ರಾಜರುಗಳನ್ನು, ಅವರಿಂದ ಲೌಕಿಕವಾದ ಲಾಭಗಳನ್ನು ಪಡೆಯುವುದಕ್ಕೋಸ್ಕರ) ಚಾಟು ರಚನಾ ಧನ್ಯಾನ್ (ಅವರನ್ನು ಚಮತ್ಕಾರವಾಗಿ ಸ್ತೋತ್ರಮಾಡಿ, ಅದರಿಂದ ನಾವು ಧನ್ಯರಾದೆವು ಎಂದು ಭಾವಿಸುವವರನ್ನು) ನ ಮನ್ಯಾಮಹೇ (ನಾನು ಗೌರವಿಸುವುದಿಲ್ಲ.)

[ನಾನು ಯಾರನ್ನು ಗೌರವಿಸುತ್ತೇನೆ ಎಂದರೆ—]

ಯಃ ದಯಾಲುಃ ಅಸೌ [ಯಾವ ದಯಾಳುವಾದ ಈ ಪರಮಾತ್ಮನು] ಪುರಾ [ಹಿಂದಿನ ಕಾಲದಲ್ಲಿ, ತಾನು ಕೃಷ್ಣನಾಗಿ ಅವತಾರ ಮಾಡಿದ್ದಾಗ]—

ಧಾನಾಮುಷ್ಟಿಮುಚೇ [ತನಗೆ ಒಂದು ಹಿಡಿ ಅವಲಕ್ಕಿಯನ್ನು ಕೊಟ್ಟ] ಕುಚೇಲಮುನಯೇ [ಹರಕು ಬಟ್ಟೆಯನ್ನುಟ್ಟ ಕುಚೇಲನೆಂಬ ಭಕ್ತನಿಗೆ] ವಿತ್ತೇಶತಾಂ [ಕುಬೇರ ಪದವಿಯನ್ನು, ಎಂದರೆ ಅಗಣಿತವಾದ ಐಶ್ವರ್ಯವನ್ನು] ದತ್ತೇ ಸ್ಮ [ಕೊಟ್ಟನೋ]—

ಅಂತಹ ದೇವಂ ಏವ [ದೇವನನ್ನೇ] ಸೇವಿತುಂ [ಸೇವಿಸುವುದಕ್ಕೆ] ನಿಶ್ಚಿನುಮಹೇ [ನಿಶ್ಚಯಿಸಿರುತ್ತೇನೆ.]



ಶಿಲಂ [ಕಾಡು ಗದ್ದೆ ಮುಂತಾದ ಸ್ಥಳಗಳಲ್ಲಿ ಕೆಳಗೆ ಬಿದ್ದಿರುವ ಧಾನ್ಯವು] ಔದರಂ [ಹೊಟ್ಟೆಯಲ್ಲಿರುವ] ಅನಲಂ [ಅಗ್ನಿಯನ್ನು, ಎಂದರೆ ಜಠರಾಗ್ನಿಯನ್ನು] ಬಾಧಿತುಂ [ಹೊಡೆದಟ್ಟುವುದಕ್ಕೆ] ಅನ್ಅಲಂ ಕಿಂ [ಸಾಕಾಗುವುದಿಲ್ಲವೇನು ?]

ಪ್ರಸೃತಿಪೂರಕಂ [ಬೆರಳುಗಳನ್ನು ಒಟ್ಟುಕೂಡಿಸಿದ ಒಂದು ಕೈಯಲ್ಲಿ ತುಂಬಿಕೊಳ್ಳಬಹುದಾದ] ಸಾರಸಂ ಪಯಃ [ಸರೋವರದ ನೀರು] ಕಿಮು ನ ಧಾರಕಂ ? [ದಾಹವನ್ನು ಹೋಗಲಾಡಿಸಿ ಕಾಪಾಡಲಾರದೇನು ?]

ಪಥಿ [ದಾರಿಯಲ್ಲಿ ಬಿದ್ದಿರುವ] ಕಚ್ಚರಂ ಪಟಚ್ಚರಂ [ಕೊಳೆಯಾದ ಹರಕುಬಟ್ಟೆಯು] ಅಯತ್ನ ಮಲಮುಲ್ಲಕಂ [ಯಾವ ಪ್ರಯತ್ನವೂ ಇಲ್ಲದೆ ಸುಲಭವಾಗಿ ದೊರಕುವ ಕೌಪೀನದ ಬಟ್ಟೆಯಾಗಿ] ಕಿಂ ನ ಭವೇತ್ [ಆಗಲಾರದೇನು ?]

[ಹೀಗೆ ಅನ್ನ, ನೀರು, ಬಟ್ಟೆ ಸುಲಭವಾಗಿ ದೊರಕುವಾಗ—]

ಬುಧಾಃ [ವಿದ್ವಾಂಸರು] ಮುಧಾ [ವ್ಯರ್ಥವಾಗಿ] ಕುಕ್ಷಿತಃ [ತಮ್ಮ ಹೊಟ್ಟೆಯ ಪಾಡಿಗೋಸ್ಕರ] ಕುಕ್ಷಿತಃ [ಅಲ್ಪರಾದ ಪ್ರಭುಗಳನ್ನು] ಭಜನ್ತಿ [ಆಶ್ರಯಿಸುತ್ತಾರೆ.] ಅಹಹ [ಇದು ಆಶ್ಚರ್ಯ !]

೩

ಜಲಧಿಕ್ರೋಡ [ಸಮುದ್ರಮಧ್ಯದಲ್ಲಿ] ಕ್ರೀಡತ್ [ಆಡುತ್ತಿರುವ, ಎಂದರೆ ಉರಿಯುತ್ತಿರುವ] ಕೃಪೀಡಭವ [ಬಡಬಾಗ್ನಿಯ] ಪ್ರಭಾ [ಪ್ರಕಾಶಕ್ಕೆ] ಪ್ರತಿಭಟ [ಪ್ರತಿಸ್ಪರ್ಧಿಯಾಗಿ], ಪಟು [ಸಮರ್ಥವಾದ] ಜ್ವಾಲಮಾಲಾ [ಜ್ವಾಲೆಯ ಮಾಲೆಗಳಿಂದ] ಆಕುಲ [ವ್ಯಾಪ್ತವಾದ] ಜಠರಾನಲಃ [ನಮ್ಮ ಹೊಟ್ಟೆಯೊಳಗಿನ ಬೆಂಕಿಯು] ಬೇಕಾದರೆ ಜ್ವಲತು [ಉರಿಯಲಿ !]

[ಅದಕ್ಕೋಸ್ಕರವಾಗಿ]—

ವಯಂ [ನಾವು], ಸಾಯಂ [ಸಾಯಂಕಾಲದಲ್ಲಿ] ಸಂಫುಲ್ಲ [ಚೆನ್ನಾಗಿ ಅರಳಿದ] ಮಲ್ಲಿಮತಲ್ಲಿಕಾ [ಉತ್ಕೃಷ್ಟವಾದ ಮಲ್ಲಿಗೆ ಹೂವಿನ] ಪರಿಮಳ ಮುಚಾ [ಸುವಾಸನೆಯನ್ನು ಬೀರುವಂತಹ] ವಾಚಾ—[ಮಾತುಗಳಿಂದ) ಮಹೇಶ್ವರಾನ್— [ರಾಜರುಗಳಾದವರನ್ನು] ತೃಣಮಪಿ [ಸ್ವಲ್ಪವಾದರೂ] ನ ಯಾಚಾಮಹೇ [ಯಾಚನೆ ಮಾಡುವುದಿಲ್ಲ.]

೪

ದುರ್ ಈಶ್ವರ [ಧೂರ್ತರಾದ ಪ್ರಭುಗಳ] ದ್ವಾರ ಬಹಿರ್ ವಿತರ್ದಿಕಾ [ಮನೆಯ ಬಾಗಿಲ ಹೊರಗಿನ ಜಗುಲಿಯ ಮೇಲೆ] ದುರಾಸಿಕಾಯೈ [ಅನೇಕ ವಿಧವಾದ ಅವಮಾನಗಳನ್ನು ಸಹಿಸಿಕೊಂಡು ಕಾಯುವ ಪರಿಸ್ಥಿತಿಗೆ] ಅಯಂ ಅಂಜಲಿಃ ರಚಿತಃ [ಇದೋ ಕೈಮುಗಿಯುವುದಾಯಿತು !]

ಯತ್ [ಯಾವುದು] ಅಂಜನ ಆಭಂ [ಕಾಡಿಗೆಯ ಕಾಂತಿಯುಳ್ಳದ್ದೋ] ನಿರಪಾಯಂ [ಅಪಾಯವಿಲ್ಲದ್ದೋ]—

ಧನಂಜಯ [ಅರ್ಜುನನ] ಸ್ಯಂದನ [ರಥಕ್ಕೆ] ಯಾವುದು ಭೂಷಣ [ಆಭರಣದಂತಿರುವುದೋ] —

ಆ ಶ್ರೀಕೃಷ್ಣನ ರೂಪವಾದ ಧನಂ [ಧನವು] ಮೇ [ನನಗೆ] ಅಸ್ತಿ [ಇದೆ.]

[ಆದ್ದರಿಂದ ನಾನು ಬೇರೆ ಯಾರನ್ನೂ ಆಶ್ರಯಿಸಬೇಕಾದ್ದಿಲ್ಲ.]

೫

ಶರೀರ ಪತನಾವಧಿ [ಈ ದೇಹವು ಬಿದ್ದುಹೋಗುವವರೆಗೂ] ಪ್ರಭು ನಿಷೇವಣಾಪಾದನಾತ್ [ಯಾರುಯಾರೋ ಒಡೆಯರನ್ನು ಸೇವೆಮಾಡುವುದರಿಂದ] — ಏನು ಸಂಪಾದನೆಯಾಗುತ್ತದೆಯೋ ಅದು—

ಅಬ್ ಇಂಧನ [ನೀರನ್ನೇ ಕಟ್ಟಿಗೆಯನ್ನಾಗಿ ಉಳ್ಳ] ಧನಂಜಯ [ಜಠರಾಗ್ನಿಗೆ] ಪ್ರಶಮ ದಂ [ಶಾಂತಿಯನ್ನು ಉಂಟುಮಾಡುವ] ಆ ಧನಂ [ಧನವು] ದಂಧನಂ [ಅತ್ಯಲ್ಪ ಪ್ರಯೋಜನವುಳ್ಳ ಧನ !]

[ಅದಕ್ಕಿಂತ ಅಧಿಕವಾದದ್ದು ಯಾವುದೆಂದರೆ—]

ಧನಂಜಯ ವಿವರ್ಧನಂ [ಅರ್ಜುನನನ್ನು ಉದ್ಧಾರಮಾಡಿದ್ದೂ]—

ಉದೂಢಗೋವರ್ಧನಂ [ಗೋವರ್ಧನಗಿರಿಯನ್ನು ಮೇಲೆತ್ತಿದ್ದೂ]—

ಸುಮನಸಾಂ [ದೇವತೆಗಳಿಗೆ, ಒಳ್ಳೆಯ ಮನಸ್ಸು ಉಳ್ಳವರಿಗೆ] ಸಮಾರಾಧನಂ [ಸಂಪೂರ್ಣ ತೃಪ್ತಿಯನ್ನು ಉಂಟುಮಾಡುವಂಥದೂ]—

ಸುಸಾಧನಂ [ಮೋಕ್ಷಕ್ಕೆ ಒಳ್ಳೆಯ ಸಾಧನವಾದದ್ದೂ]—

ಅಬಾಧನಂ [ತನ್ನನ್ನು ಆಶ್ರಯಿಸಿದವರಿಗೆ ಯಾವ ಬಾಧೆಯೂ ಇಲ್ಲದಂತೆ ಕಾಪಾಡುವಂಥದೂ]— ಅದ—

[ಶ್ರೀಕೃಷ್ಣನ ರೂಪದಲ್ಲಿರುವ] ಧನಂ [ಧನವು.]

೬

ಮೇ [ನನಗೆ] ಪಿತ್ರಾರ್ಜಿತಂ [ತಂದೆ ಸಂಪಾದಿಸಿ ಇಟ್ಟದ್ದು] ಕಿಂಚಿತ್ [ಸ್ವಲ್ಪವೂ] ನ ಅಸ್ತಿ [ಇಲ್ಲ.]

ಮಯಾ [ನನ್ನಿಂದ] ಕಿಂಚಿತ್ [ಸ್ವಲ್ಪವೂ] ನ ಆರ್ಜಿತಂ [ಸಂಪಾದಿಸಲ್ಪಡಲಿಲ್ಲ.]

[ಅದು ಯಾವುದೂ ಇಲ್ಲದೆ ನಾನು ಹೇಗೆ ಬದುಕುತ್ತಿದ್ದೇನೆ ಎಂದರೆ-]

ಹಸ್ತಿಶೈಲಾಗ್ರೇ [ಕಾಂಚೀಪುರದಲ್ಲಿರುವ ಹಸ್ತಿಗಿರಿಯ ತುದಿಯಲ್ಲಿ] ಪೈತಾಮಹಂ [ಪಿತಾಮಹನಾದ ಚತುರ್ಮುಖ ಬ್ರಹ್ಮನು ಸಂಪಾದಿಸಿ ಇಟ್ಟ] ವಸ್ತು [ವರದರಾಜ ಸ್ವಾಮಿಯ ರೂಪದಲ್ಲಿರುವ ಆಸ್ತಿಯು] ಮೇ [ನನಗೆ] ಅಸ್ತಿ [ಇದೆ.]

ಕವಿತಾರ್ಕಿಕಸಿಂಹಾಯ (ಕವಿಶ್ರೇಷ್ಠರೂ ತಾರ್ಕಿಕಶ್ರೇಷ್ಠರೂ ಆದ], ಕಲ್ಯಾಣಗುಣಶಾಲಿನೇ [ಕಲ್ಯಾಣ ಗುಣಗಳಿಂದ ಕೂಡಿದ] ವೇದಾಂತಗುರವೇ [ವೇದಾಂತವನ್ನು ಉಪದೇಶಿಸುವ ಗುರುವಾದ] ಶ್ರೀಮತೇ ವೇಂಕಟೇಶಾಯ [ಭಕ್ತಿಜ್ಞಾನವೈರಾಗ್ಯಸಂಪನ್ನರಾದ ವೇಂಕಟನಾಥರಿಗೆ] ನಮಃ.

---

(ಪುಟ ನಾಲ್ಕರಿಂದ ಮುಂದುವರಿದುದು)

"ಆಕಿಂಚನ್ಯ" (ತನ್ನದೆಂಬ ಯಾವುದನ್ನೂ ಹೊಂದದಿರುವುದು) ಎಂದು ಕೊಂಡಾಡಿದರೋ ಅದನ್ನು ಅಸ್ಸೀಸ್ಸಿಯ ಸೈಂಟ್ ಫ್ರಾನ್ಸಿಸ್ ಎಂಬ ಕ್ರೈಸ್ತ ಮಹಾತ್ಮನು "Lady Poverty" ಎಂದು ಕರೆದು, ಅದನ್ನೇ ಉಪಾಸನೆ ಮಾಡಿದ. ಶ್ರೀ ವೇದಾಂತ ದೇಶಿಕರು ಇಂಥವರ ದೊಡ್ಡ ಪಂಕ್ತಿಗೆ ಸೇರಿದವರು.

"Properties are not Proper ties" ಎನ್ನುತ್ತಾರೆ ಶ್ರೀ ಸತ್ಯಸಾಯಿ ಬಾಬಾ. ಆಸ್ತಿಗೂ ಆಸ್ತಿಕತೆಗೂ ಏನೂ ಸಂಬಂಧವಿಲ್ಲ. "ಶ್ರೀ-ಪತಿ"ಯಾಗುವ ಯೋಗ್ಯತೆಯಿರುವುದು ಭಗವಂತನೊಬ್ಬನಿಗೇ. ವೈರಾಗ್ಯದಿಂದ ಶಿವ ಶಂಕರನಾದ. "ತೇನ ತ್ಯಕ್ತೇನ ಭುಂಜೀಥಾಃ" (ಅದನ್ನು ಬಿಡುವುದರಿಂದ ಅದನ್ನು ಅನುಭೋಗಿಸಿರಿ) ಎಂದಿತು ಈಶೋಪನಿಷತ್ತು. "ಬ್ಲಡ್ಡು, ದುಡ್ಡು ಎರಡೂ ಸರ್ಕ್ಯುಲೇಟ್ ಆಗುತ್ತಿರಬೇಕು" ಎಂದಿದ್ದಾರೆ ಶ್ರೀ ಸತ್ಯಸಾಯಿ ಬಾಬಾ. "ಹಣವನ್ನು ಎಷ್ಟು ಹತ್ತಿರ ಬರಮಾಡಿಕೊಂಡರೆ ಅಷ್ಟು ದೇವರಿಂದ ದೂರವಾಗುತ್ತೇವೆ" ಎಂದರು ಯೇಸು ಸ್ವಾಮಿ. ಗಾಂಧಿಯವರಾದರೂ ಆಕಿಂಚನ್ಯಕ್ಕೆ, ಅಪರಿಗ್ರಹಕ್ಕೆ ಆದರ್ಶಪುರುಷರು. ಲೋಕದಲ್ಲಿ ಇಂಥವರು "ಎಂದುರೋ ಮಹಾನುಭಾವುಲು, ಅಂದರಿಕಿನಿ ವಂದನಮುಲು." ಇವರೆಲ್ಲರೂ ನಮಗೆ ಗುರುಗಳೇ. "ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕಮಧೀಮಹೇ."

ಸಜ್ಜನರ ಸಂಗದಿಂದ ಅವರ ಪರಿಮಳ ನಮ್ಮನ್ನೂ ಆವರಿಸಿ, ನಮ್ಮ ಬದುಕಿನಲ್ಲಿ ಸುಖ ಶಾಂತಿಗಳನ್ನು ತುಂಬಲಿ.

— ಜಿ. ಪಿ. ರಾಜರತ್ನಂ.

೧೯-೯-೭೨

# ಕುಲಶೇಖರ ಆಳ್ವಾರರ ವೈರಾಗ್ಯ

ನಾಥೇ ನಃ ಪುರುಷೋತ್ತಮೇ ತ್ರಿಜಗತಾಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಶುಭೇ ನಾರಾಯಣೇ ತಿಷ್ಠತಿ
ಯಂ ಕಂಚಿತ್ ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ ಮೂಕಾ ವರಾಕಾ ವಯಂ

ನಮಗೆ ನಾಥನೂ, ಪುರುಷೋತ್ತಮನೂ, ಮೂರು ಲೋಕಗಳಿಗೆ ಏಕಾಧಿಪತಿಯೂ, ನಾವು ಮನಃಪೂರ್ವಕವಾಗಿ ಸೇವಿಸಲು ತಕ್ಕವನೂ, ಶುಭವಾದ ತನ್ನ ಪರಮಪದವನ್ನೇ ದಾನಮಾಡುವವನೂ ಆದ ನಾರಾಯಣನು, [ನಾವು ಏನು ಬಯಸಿದರೂ ಅದನ್ನು ಕೊಡುವುದಕ್ಕೆ ಬದ್ಧಕಂಕಣನಾಗಿ] ಇದ್ದಾನೆ.

ಹೀಗೆ ನಮಗೆ ಆತನು ಇರುವಾಗ—ಯಾವನೋ ಪುರುಷಾಧಮನನ್ನು, ಕೆಲವು ಕುಗ್ರಾಮಗಳಿಗೆ ಒಡೆಯನಾದವನನ್ನು, ನಮಗೆ ಅಲ್ಪಾರ್ಥಗಳನ್ನು ಕೊಡುವ ಮನುಷ್ಯಮಾತ್ರನನ್ನು ಹುಡುಕಿಕೊಂಡು ಹೋಗುತ್ತೇವೆ! ಇದು ಆಶ್ಚರ್ಯ! ನಾವು ಮೂಢರು, [ನಮಗೆ ಯಾವುದು ಒಳ್ಳೆಯದು ಎಂದು ತಿಳಿಯದ] ಕೀಳರು ನಾವು.

ಜಿಹ್ವೇ ಕೀರ್ತಯ ಕೇಶವಂ; ಮುರರಿಪುಂ ಚೇತೋ ಭಜ; ಶ್ರೀಧರಂ
ಪಾಣಿದ್ವಂದ್ವ ಸಮರ್ಚಯಾಚ್ಯುತಕಥಾಃ ಶ್ರೋತ್ರದ್ವಯ ತ್ವಂ ಶೃಣು;
ಕೃಷ್ಣಂ ಲೋಕಯ ಲೋಚನದ್ವಯ; ಹರೇರ್ಗಚ್ಛಾಂಘ್ರಿಯುಗ್ಮಾಲಯಂ;
ಜಿಘ್ರ ಘ್ರಾಣ ಮುಕುಂದಪಾದತುಲಸೀಂ; ಮೂರ್ಧನ್ನಮಾಧೋಕ್ಷಜಂ.

ನಾಲಗೆಯೇ, ಕೇಶವನನ್ನು ಕೀರ್ತಿಸು; ಮನಸ್ಸೇ, ಮುರರಿಪುವನ್ನು ಭಜಿಸು; ಎರಡು ಕೈಗಳೇ, ಶ್ರೀಧರನನ್ನು ಚೆನ್ನಾಗಿ ಅರ್ಚಿಸಿರಿ; ಎರಡು ಕಿವಿಗಳೇ, ಅಚ್ಯುತನ ಕತೆಯನ್ನು ನೀವು ಕೇಳಿ; ಎರಡು ಕಣ್ಣುಗಳೇ, ಕೃಷ್ಣನನ್ನು ನೀವು ಕಾಣಿ; ಎರಡು ಕಾಲುಗಳೇ, ಹರಿಯ ಆಲಯಕ್ಕೆ ಹೋಗಿರಿ; ಮೂಗೇ, ಮುಕುಂದನ ಪಾದಗಳ ತುಲಸಿಯನ್ನು ಆಘ್ರಾಣಿಸು; ತಲೆಯೇ, ಅಧೋಕ್ಷಜ [ಇಂದ್ರಿಯ ವ್ಯಾಪಾರಗಳಿಲ್ಲದ ನಾರಾಯಣ] ನಿಗೆ ನಮಸ್ಕರಿಸು.

## ಪಂಪ ಕವಿಯ ವೈರಾಗ್ಯ

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಮೆಂ-
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗಟ್ತೆ ಮುಕ್ತಿ ಸಂ-
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ-
ರವೆ ಪೆಱರೀವುದೇಂ ಪೆಱಱ ಮಾಡುವುದೇಂ ಪೆಱಱಿಂದವಪ್ಪುದೇಂ

ಕವಿತೆಯನ್ನು ಬರೆಯುವುದರಿಂದ ಅಪೇಕ್ಷೆಪಡುವ ಫಲ ಯಾವುದೋ ? ಪೂಜೆ, ಖ್ಯಾತಿ, ಲಾಭ ಎಂಬ ಇವೇ ತಾನೆ ?

ಇಂದ್ರನು ಮಾಡುವಂತಹ ಪೂಜೆ, ಮೂರು ಲೋಕದವರೂ ಹೊಗಳುವಂತಹ ಕೀರ್ತಿ, ಮುಕ್ತಿ ಸಂಭವಿಸುವ ಲಾಭ—ಎಂಬ ಈ ಇಷ್ಟಾರ್ಥಗಳು ಮೂರೂ—

ಜಿನೇಂದ್ರನ ಗುಣಗಳನ್ನು ಸ್ತುತಿಸುವುದರಿಂದ ತಾವಾಗಿಯೇ ನಮ್ಮ ಸಮೀಪಕ್ಕೆ ಬಂದು ಸೇರುತ್ತವೆ, ಎಂದಮೇಲೆ—

ಬೇರೆಯವರು ಕೊಡುವುದೇನು ? ಬೇರೆಯವರು ಮಾಡುವುದೇನು ? ಬೇರೆಯವರಿಂದ ನಮಗೆ ಆಗುವುದು ತಾನೆ ಏನು ?

(ತನ್ನ ಮೊದಲನೆಯ ಕಾವ್ಯವಾದ "ಆದಿಪುರಾಣ"ದಲ್ಲಿ ಹೀಗೆಂದ ಪಂಪ ಕವಿ, ತನ್ನ ಎರಡನೆಯ ಕಾವ್ಯವಾದ "ವಿಕ್ರಮಾರ್ಜುನ ವಿಜಯ"ವನ್ನು ಬರೆಯುವ ಹೊತ್ತಿಗೆ ಅರಿಕೇಸರಿಯೆಂಬ ಅರಸನ ಬಳಿ ಊಳಿಗಕ್ಕೆ ಬಂದು ಸೇರಿಕೊಂಡಿದ್ದ. "ನಿಜದೊಳೆ ಭೂಪರ್ ಎಂಬರ್ ಅವಿವೇಕಿಗಳಪ್ಪರ್.... ಓಲಗಿಸಿ ಬಾಳ್ವುದೆ ಕಷ್ಟಂ ಇಳಾಧಿನಾಥರಂ" ಎಂಬ ಪಂಪಭಾರತದ ಮಾತುಗಳು, ಕವಿಯು ಸ್ವಾನುಭವದಿಂದ ಕಂಡುಕೊಂಡ ಸತ್ಯವಾಗಿದ್ದರೂ ಇರಬಹುದೋ ಏನೋ !)

# ಹರಿಹರ ಕವಿಯ ವೈರಾಗ್ಯ

೧

ನರರಂ ಸೇವಿಪ ಜೀಯಜೀಯೆನುತುಮಿರ್ಪೇನೆಂದೊಡಂ ದೈನ್ಯಮು-
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ-
ರ್ಪಿರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ-
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ.

ಮನುಷ್ಯಮಾತ್ರರಾದವರನ್ನು ಸೇವಿಸುವ, ಜೀಯಾ ಜೀಯಾ ಎನ್ನುತ್ತಾ ಇರುವ, ಒಡೆಯನು ಏನೆಂದರೂ ದೈನ್ಯದ ಆಧಿಕ್ಯದಿಂದ ದೇಹವನ್ನು ಸಣ್ಣದು ಮಾಡಿಕೊಂಡು ತನಗೆ ತಾನೇ ಬೇಡುತ್ತಾ ಇರುವ ಸ್ಥಿತಿಯನ್ನು ಸುಟ್ಟು ಬಿಸುಟ್ಟು—

ಭಕ್ತಿಯಲ್ಲಿ ಮುಳಗಿ ತೇಲಾಡಲು ಮನಸ್ಸುಮಾಡಿ, ಶಂಕರನೂ ಶಾಶ್ವತನೂ ಕೃಪಾಸಮುದ್ರನೂ ಆದ ವಿರೂಪಾಕ್ಷನನ್ನು ನಾನು ಕಂಡೆ!

೨

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ-
ಳ್ಪಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮು-
ತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ ಸೇವಿಪ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಪಂಪೆಯಾಳ್ದನೇ.

‘ಹೋಗು’ ಎಂದರೆ ಹೋಗುವ, ‘ಬಾರೊ! ಲೋ, ಬಾರೊ?’ ಎಂದರೆ ‘ಸ್ವಾಮಿ, ತಮ್ಮ ಚಿತ್ತ’ ಎಂದು ಬೆಪ್ಪಾಗುತ್ತಾ ಬರುವ, ‘ಸಾಕೋ ಲೋ! ಸುಮ್ಮನಿರೊ!’ ಎಂದರೆ ಸುಮ್ಮನಿರುವ, ಮತ್ತೆ ಆಗಲೆ ಗದರಿದರೆ ನಡುಗಿ ಕಾಲಿಗೆ ಬೀಳುವ—

ಈ ರೀತಿಯಾಗಿ ಸೇವೆಮಾಡುವ ಹೀನವೃತ್ತಿಯನ್ನು, ಕರುಣಾಕರನಾದ ಹಂಪೆಯರಸನೇ! ನಿಮ್ಮ ದಯೆಯಿಂದ ಇಂದು ನಾನು ನೀಗಿಕೊಂಡೆನು.



ಸಡಿ ಫಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ-
ಪ್ಪಡದ ಶರೀರಿಗಳ್ ತೃಣದ ಹಾಹೆಗಳಕ್ಕಟ ಮಣ್ಣ ಬೊಂಬೆಗಳ್
ಕುಡುವುವೆ ಜೇಡು ಬೇಡಿದುದನೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ.

ಛೀ! ಥು! 'ಮನುಷ್ಯರು ಕೊಡುತ್ತಾರೆ' ಎಂಬುದನ್ನು ನನ್ನ ಮುಂದೆ ಆಡದಿರು. ಇವರು ಬಟ್ಟೆಯಿಂದ ಮಾಡಿದ ಶರೀರಿಗಳು! ಹುಲ್ಲಿನಿಂದ ಮಾಡಿದ ಆಕೃತಿಗಳು! ಮಣ್ಣಿನಿಂದಾದ ಬೊಂಬೆಗಳು! ಇವು ನಮ್ಮ ಇಷ್ಟಾರ್ಥವನ್ನು ಕೊಡುತ್ತವೆಯೆ?

ನೀನು ಬೇಡುವುದಾದರೆ, ಬೇಡಿದುದನ್ನು ನೀಡುವ ಮಹಾನಿಧಿಯಾದ ಮಹೇಶನನ್ನು ಜೇಡು! ನೀನು ಕೇಳಿದ್ದನ್ನೆಲ್ಲಾ ಕೊರತೆಯಿಲ್ಲದೆ ಕೊಡುವ ಅನೂನದಾನಿಯಾದ ಮೃಡನನ್ನು ಬೇಡು! ಪ್ರೇಮಸ್ವರೂಪನೂ ಪರಮೈಶ್ವರ್ಯ ವುಳ್ಳವನೂ ಆದ ಹಂಪೆಯ ಅರಸನನ್ನು ಬೇಡು.

(ಹರಿಹರ ಕವಿ, ಹೊಯಿಸಳ ನರಸಿಂಹ ಬಲ್ಲಾಳನ ಆಳ್ವಿಕೆಯಲ್ಲಿ 'ಕರಣಿಕರ ಕುಲತಿಲಕ'ನಾಗಿದ್ದನು. ಆ ಸೇವಾವೃತ್ತಿಯ ಸಂದರ್ಭದಲ್ಲಿ ಏನಾಯಿತೋ ಏನೋ! 'ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯಮಂ—ತನತನಗೆ ಇಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರ ಸೆಂದು ತಾನ್ ಅನವರತಂ ಪೊಗಳ್ದು ಕೆಡಬೇಡ, ಎಲೆ ಮಾನವ! ನೀನ್ ಅಹರ್ನಿಶಂ ನೆನೆ, ಪೊಗಳು, ಅರ್ಚಿಸು—ಎಮ್ಮ ಕಡುಸೊಂಪಿನ ಪೆಂಪಿನ ಹಂಪೆಯೊಳ್ದನಂ!' ಎಂದು ವಿರಕ್ತನಾಗಿ, ಪಂಪಾಕ್ಷೇತ್ರದ ವಿರೂಪಾಕ್ಷದೇವರ ಸೇವೆಯಲ್ಲಿ ನಿರತನಾದನು. 'ಹರಂಗೆ ಶಶಿಭೂಷಂಗೆ ಈಶ್ವರಂಗೆ ಎಯ್ದೆ ನಾಲಗೆಯಂ ಮಾರಿದೆನ್ ಒಲ್ದು' ಎಂದು ಶಿವನನ್ನೂ ಶಿವಶರಣರನ್ನೂ ಹೊಗಳಿ ಹಾಡಿ ಅನೇಕ ಕಾವ್ಯಗಳನ್ನು ರಚಿಸಿದನು.)

# ಪುರಂದರದಾಸರ 'ವೈರಾಗ್ಯ-೧.

ನಾಕೇಕೆ ಬಡವನು ನಾನೇಕೆ ಪರದೇಶಿ
ಶ್ರೀನಿಧೇ ಹರಿ ಎನಗೆ ನೀನಿರುವ ತನಕ ||ಪ||

ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ
ಅಷ್ಟಬಂಧುವು ಸರ್ವ ಬಳಗ ನೀನೆ ।
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ
ಶ್ರೇಷ್ಠಮೂರುತಿ ಕೃಷ್ಣ ನೀನಿರುವ ತನಕ ||೧||

ಒಡಹುಟ್ಟಿದವ ನೀನೆ ಒಡಲಿಗ್ಹಾಕುವ ನೀನೆ
ಉಡಲು ಹೊದೆಯಲು ವಸ್ತ್ರ ಕೊಡುವ ನೀನೇ
ಮಡದಿ ಮಕ್ಕಳನೆಲ್ಲ ಕಡೆಹಾಯಿಸುವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವ ತನಕ ||೨||

ವಿದ್ಯೆ ಹೇಳುವ ನೀನೆ ಬುದ್ಧಿ ಕಲಿಸುವ ನೀನೆ
ಉದ್ಧಾರಕರ್ತ ಮಮ ಸ್ವಾಮಿ ನೀನೇ
ಮುದ್ದು ಸಿರಿಪುರಂದರ ವಿಠಲ ನಿನ್ನಡಿಮೇಲೆ
ಬಿದ್ದುಕೊಂಡಿರುವ ಎನಗೇತರ ಭಯವೋ ||೩||

(ಅರ್ಥ ಸುಲಭವಾಗಿದೆ.)

## ಪುರಂದರದಾಸರ ವೈರಾಗ್ಯ-೨

ಕಾಯಲಾರೆನು ರಂಗ ಕಂಡವರ ಬಾಗಿಲನು |
ನಾಯಿಕುನ್ನಿಯಂತೆ ನರರ ಪೀಡಿಸುತ ||ಪ||

ಉದಯದಲಿ ಎದ್ದು ಸಂಧ್ಯಾನವಿಧಿಗಳ ಬಿಟ್ಟು |
ಪದುಮನಾಭನ ಸ್ಮರಣೆ ಮೊದಲಿಲ್ಲದೆ ||
ಮುದದಿ ನಿನ್ನರ್ಚಿಸದೆ ನರರ ಸದನವ ಪೊಕ್ಕು |
ಒದಗಿ ಸೇವೆಯ ಮಾಡಿ ಅವರ ಬಾಗಿಲನು ||೧||

ಕಲ್ಲ ಕರಗಿಸಬಹುದು ಕಡಲೆ ಹುರಿಗಡಲೆಯೊಳು |
ತೈಲವನು ತೆಗೆದಾದರುಣ್ಣಬಹುದು ||
ಬಲ್ಲಿದರ ಮನವ ಮೆಚ್ಚಿಸಲಾರೆ ಪ್ರತಿದಿನದಿ |
ಹಲ್ಲುಗಿರಿಗಿರಿದು ಹಂಬಲಿಸಿ ಬಾಯ ಬಿಡುತ ||೨||

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ |
ಭ್ರಾಂತಿಯೆಂದೆಂಬ ಹೆಬ್ಬಲೆಗೆ ಸಿಕ್ಕಿ ||
ಅಂತ್ಯ ಮೊದಲನು ಕಾಣೆ ಅರಿಕೆ ನಿನಗಿನಿತೆಲ್ಲ ನಿ- |
ಶ್ಚಿಂತನಾಗಿರಿಸಯ್ಯ ಪುರಂದರ ವಿಠಲ ||೩||

### ಅಭೀತಿಸ್ತವ

ಶ್ರೀ ವೇದಾಂತ ದೇಶಿಕರು, ತಮ್ಮ ಕಾಲದಲ್ಲಿ ತಲೆದೋರಿದ ತುರುಷ್ಕರ ಬಾಧೆಯನ್ನು ಹೋಗಲಾಡಿಸಬೇಕೆಂದು ಶ್ರೀ ರಂಗನಾಥನಲ್ಲಿ ಮಾಡಿಕೊಂಡ ಪ್ರಾರ್ಥನೆಯೇ "ಅಭೀತಿಸ್ತವ." ಶ್ರೀ ಡಿ.ವಿ.ಜಿ. ಅವರು ಮೂಲದ ೩ ಶ್ಲೋಕಗಳ ಆಧಾರದಿಂದ ತಾವು ೪ ಚರಣ ಬರೆದಿದ್ದಾರೆ. ಅದನ್ನು ಮುಂದಿನ ಪುಟದಲ್ಲಿ ಕೊಟ್ಟಿದೆ.

# ಅಭೀತಿಸ್ತವ

ಮರುನ್ಮರೀಚಿ ಚಂದ್ರಮರ್ ಸುರೇಶಮೃತ್ಯುಪಾವಕರ್
ಚರಿಪ್ಪರಲ್ತೆ ವಿಶ್ವದೊಳ್ ಪರೇಶ ನಿನ್ನೊಳಂಜುತುಂ
ಮುರಾದಿ ದೈತ್ಯನಾಶದೊಳ್ ಪ್ರಯುಕ್ತಮಾದ ಶಸ್ತ್ರಮಂ
ದುರಾತ್ಮರೊಳ್ ತುರುಷ್ಕರೊಳ್ ಪ್ರಯೋಗಿಸಲ್ಕೆ ಬಾರೆಯೇಂ ||೧||

ದಶಾಸ್ಯಮುಖ್ಯದುಷ್ಟರಂ ವಿಶೇಷಶೌರ್ಯದಿಂದೆ ಕೊಂ-
ದಶೇಷಲೋಕಭೀತಿಯಂ ಪ್ರಶಾಂತಗೈದೆಯಲ್ತೆ ನೀಂ
ನಿಶಾಚರಾವತಾರರಂ ತುರುಷ್ಕಯಾವನಾದ್ಯರಂ
ವಿಶೀರ್ಣಗೈವುದಿಂದು ನೀಂ ಪ್ರಶಸ್ತ ಕಲ್ಕಿರೂಪದಿಂ ||೨||

ಕಲಿಪ್ರಚಾರದೀಕ್ಷಿತರ್ ತುರುಷ್ಕಹೂಣಘಾತುಕರ್
ತ್ರಿಲೋಕಪುಣ್ಯಧಾಮನುಂ ಪ್ರಸಿದ್ಧ ರಂಗಧಾಮಮಂ
ಛಲಂ ಚಲುಂಕಿ ಪೀಡಿಸಲ್ ವಿಲಾಸಗೊಳ್ವರೇಂ ವಿಭೋ
ತ್ರಿಲೋಕನಾಥ ತೋರು ನಿನ್ನ ಧರ್ಮರಕ್ಷದೀಕ್ಷೆಯಂ ||೩||

ಗದಾ ರಥಾಂಗ ಪಾಂಚಜನ್ಯ ಶಾರ್ಙ್ಗ ನಂದಕಾದಿಗಳ್
ತ್ವದೀಯದಿವ್ಯಶಕ್ತಿಯಂ ಪ್ರದರ್ಶಿಸಲ್ಕೆ ಬಾರವೇಂ
ಸದಾಶ್ರಯಂ ದಯಾಮಯಂ ವಿಜೃಂಭಿಸುತ್ತೆ ದೇವ ನೀಂ
ವಿದೂರಗೈವುದೀಗಳೀ ವಿದೇಶದುಷ್ಟಜಾಲಮಂ ||೪||

—ಶ್ರೀಮಾನ್ ಡಿ.ವಿ.ಜಿ. ಅವರ "ವಿದ್ಯಾರಣ್ಯ ವಿಜಯ"ದಿಂದ

## ಸುಲಭವಾದ

# ಕೆಲವು ಶ್ರೀವೈಷ್ಣವ ಬಾಲಬೋಧೆಗಳು

ಸಂಪಾದಕ : **ಜಿ. ಪಿ. ರಾಜರತ್ನಂ**

೧. ಕುಲಶೇಖರ ಆಳ್ವಾರರ **ಮುಕುಂದಮಾಲಾ.** ಸಂಸ್ಕೃತ ಮೂಲ, ಕನ್ನಡ ಅರ್ಥ, ಮತ್ತು ಅದನ್ನು ಮನನ ಮಾಡಲು ಅನುಕೂಲವಾಗುವ ಜ್ಞಾಪಕರೂಪ. ೧-೦೦

೨. **ಪ್ರಾಣೇಶ್ವರ ಪ್ರಾಪ್ತಿ.** ಆಂಡಾಳ್ ಅವರ 'ನಾಚ್ಚಿಯಾರ್ ತಿರುಮೊಳಿ'ಯಿಂದ ಆರಿಸಿದ '**ವಾರಣಮಾಯಿರಮ್**' ಎಂಬ ೧೧ ಪಾಶುರಗಳು, ತಮಿಳು ಮೂಲ, ಕನ್ನಡ ಅರ್ಥ, ಪದ್ಯಾನುವಾದ. ಜೊತೆಗೆ ವಿದ್ವಾನ್ ಶ್ರೀ ವಿ. ಶ್ರೀರಂಗಾಚಾರ್ ಅವರ 'ತಿರುಪ್ಪಾವೈ' ಹೊಸಗನ್ನಡ ಪದ್ಯಾನುವಾದ. ೦-೫೦

೩. **ಶ್ರೀ ವಿಷ್ಣುಚಿತ್ತ.** ಆಂಡಾಳ್ ಅವರ ತಂದೆಯಾದ ಪೆರಿಯಾಳ್ವಾರರ '**ತಿರುಪ್ಪಲ್ಲಾಂಡು**' ದಿವ್ಯಪ್ರಬಂಧ. ತಮಿಳು ಮೂಲ, ಪದಶಃ ಕನ್ನಡ ಅನುವಾದ. ಶ್ರೀ ಮಣವಾಳ ಮುನಿಗಳ 'ಉಪದೇಶ ರತ್ನಮಾಲೈ'ಯಿಂದ 'ಪೆರಿಯಾಳ್ವಾರ್ ಅವರ ಹಿರಿಮೆ'. ಪೆರಿಯಾಳ್ವಾರರ ನೀರಾಟ್ಟಮ್, ಪೂಚ್ಚೂಡಲ್, ಕಾಪ್ಪಿಡಲ್ ಇವುಗಳ ಗದ್ಯಾನುವಾದ. ೦-೫೦

೪. **ತಿರುಪ್ಪಾವೈ.** ತಮಿಳು ಮೂಲ, ಕನ್ನಡ ಅನುವಾದ. ಆಂಡಾಳ್ ವೈಭವವನ್ನೂ ತಿರುಪ್ಪಾವೈ ಹಿರಿಮೆಯನ್ನೂ ಕುರಿತ ಪ್ರಬಂಧಗಳೊಡನೆ. ೧--೨೫

೫. **ಮಾಣಿಕ್ಕಂಗಟ್ಟಿ.** ಪೆರಿಯಾಳ್ವಾರ್ ಅವರ 'ತಿರುಮೊಳಿ' ಯಿಂದ ಆಯ್ದ ೧೦ ಪಾಶುರಗಳು. ಕೃಷ್ಣನಿಗೆ ತೊಟ್ಟಿಲಿಡುವ ಹಾಡು. ತಮಿಳು ಮೂಲ, ಪದಶಃ ಕನ್ನಡ ಅನುವಾದ. ೦--೫೦

೬. **ಶ್ರೀಕೃಷ್ಣ ಸೇವಾವ್ರತಂ.** ಶ್ರೀ ಗೋದಾ ವಿರಚಿತ '**ತಿರುಪ್ಪಾವೈ**' ಗ್ರಂಥದ ಕರ್ಣಾಟಕಾನುವಾದ. ಶ್ರೀಮಾನ್ ಎಸ್. ಜಿ. ಗೋವಿಂದರಾಜ ಅಯಂಗಾರ್ಯರ್ ಅವರು ಮಾಡಿದ್ದು, ಮೂಲದ ಒಂದೊಂದು ಪಾಶುರಕ್ಕೆ ಎರಡೆರಡು ವಾರ್ಧಕಷಟ್ಪದಿಗಳಂತೆ. ಅರ್ಥ ಮಾಡಿಕೊಳ್ಳಲು ಸಹಾಯವಾಗುವ 'ಟಿಪ್ಪಣಿ' ಸಹಿತವಾಗಿ. ೦--೭೫

೭. **ಶ್ರೀ ವೈಷ್ಣವ ಕೈಂಕರ್ಯ.** ಬೆಂಗಳೂರು ಹೆಬ್ಬಾರ್ ಶ್ರೀವೈಷ್ಣವ ಸಭೆಯ ೫೧ನೇ ವಾರ್ಷಿಕೋತ್ಸವದ ಅಂಗವಾಗಿ ಪ್ರಕಟವಾದದ್ದು. ಶ್ರೀ ವೈಷ್ಣವ ಸಂಪ್ರದಾಯದ ಕೆಲವು ಕತೆಗಳು, ಕನ್ನಡದಲ್ಲಿರುವ ಆಂಡಾಳ್ ಸಾಹಿತ್ಯದ, ಶ್ರೀ ರಾಮಾನುಜ ಸಾಹಿತ್ಯದ ಸೂಚಿ. ೧--೦೦

೮. **ಅಮಲನಾದಿಪಿರಾನ್.** ತಿರುಪ್ಪಾಣಾಳ್ವಾರರ ದಿವ್ಯ ಪ್ರಬಂಧ. ತಮಿಳು ಮೂಲ, ಕನ್ನಡ ಅರ್ಥ. ಚಿಕುಪಾಧ್ಯಾಯರ 'ದಿವ್ಯಸೂರಿ ಚರಿತೆ'ಯಿಂದ 'ತಿರುಪ್ಪಾಣಾಳ್ವಾರರ ವೈಭವಂ; ಹಳಗನ್ನಡ ಮೂಲ, ಹೊಸಗನ್ನಡ ಅರ್ಥ. ೧--೦೦

೯. **ಕಣ್ಣಿನುಣ್ ಶಿರುತ್ತಾಂಬು.** ಮಧುರ ಕವಿಯಾಳ್ವಾರರ ದಿವ್ಯಪ್ರಬಂಧ. ತಮಿಳು ಮೂಲ, ಕನ್ನಡ ಅನುವಾದ. ಜೊತೆಗೆ 'ನಮ್ಮಾಳ್ವಾರ, ಮಧುರಕವಿಯಾಳ್ವಾರ ವೈಭವ.' ೧--೦೦

೧೦. ಶ್ರೀ ವೇದಾಂತ ದೇಶಿಕರ '**ವೈರಾಗ್ಯ ಪಂಚಕಂ.**' ಸಂಸ್ಕೃತ ಮೂಲ, ಕನ್ನಡ ಅರ್ಥ. ಇತರ ವಿಷಯಗಳು. ೦--೫೦

ಪುಸ್ತಕಗಳು ದೊರೆಯುವ ಸ್ಥಳ:

**೧. ಜಿ. ಪಿ. ರಾಜರತ್ನಂ, ೧೭ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು.**
**೨. ಹೆಬ್ಬಾರ್ ಶ್ರೀವೈಷ್ಣವ ಸಭಾ, ಶೇಷಾದ್ರಿ ರಸ್ತೆ, ಬೆಂಗಳೂರು.**

# ಕೆಲವು ಧಾರ್ಮಿಕ ಪುಸ್ತಿಕೆಗಳು

ಸಂಪಾದಕ: **ಜಿ. ಪಿ. ರಾಜರತ್ನಂ**

| | | | |
|---|---|---|---|
| ೧. | ಗುರುಪೂರ್ಣಿಮಾ | ... | ೦-೫೦ |
| ೨. | ಸಾಯಿವಚನಮಧು | .... | ೦-೫೦ |
| ೩. | ಸಾಯಿಸುಧಾಬಿಂದು | .... | ೦-೫೦ |
| ೪. | ಸಾಯಿಸಲ್ಲಾಪ | .... | ೦-೫೦ |
| ೫. | ಸಾಯಿಚಿಂತನ | .... | ೧-೨೫ |
| ೬. | ಮಹಾತ್ಮರ ಮರಣ | .... | ೦-೫೦ |
| ೭. | ಗಾಂಧೀರಾಜ್ಯಭಾರ | .... | ೦-೫೦ |
| ೮. | ಗಾಂಧೀಗಾಯತ್ರಿ | .... | ೦-೫೦ |
| ೯. | ವಿದ್ಯಾರ್ಥಿಯೋಗ | ... | ೦-೫೦ |
| ೧೦. | ಮಾನಮರ್ಯಾದೆ | .... | ೦-೫೦ |
| ೧೧. | ವೈಶಾಖ ಶುಕ್ಲ ಪೂರ್ಣಿಮಾ | .... | ೧-೦೦ |
| ೧೨. | ಸರ್ವದೇವನಮಸ್ಕಾರ | .... | ೧-೦೦ |
| ೧೩. | ಆದಿತ್ಯಹೃದಯ | .... | ೧-೦೦ |
| ೧೪. | ನೀತಿರತ್ನಕರಂಡ | .... | ೧-೦೦ |
| ೧೫. | ಇಸ್ಲಾಂ ಧರ್ಮದ ಪರಿಮಳ | .... | ೧-೦೦ |
| ೧೬. | ಪುರುಷೋತ್ತಮಯೋಗ | .... | ೦-೫೦ |
| ೧೭. | ಪುಟಾಣಿ ಪ್ರಾರ್ಥನೆಗಳು | .... | ೦-೫೦ |

ಪ್ರತಿಗಳು ದೊರೆಯುವ ಸ್ಥಳ:

**'ವಿದೇಹ', ೧೭ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-೩.**